## ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1547 |
| ಸದಸ್ಯರ ಹೆಸರು | : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : 19.03.2020 |
| ಉತ್ತರಿಸುವ ಸಚಿವರು | : ಜಲ ಸಂಪನ್ಮೂಲ ಸಚಿವರು |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಕೃಷ್ಣಾ ನ್ಯಾಯಾಧೀಕರಣ–2 ಐತೀರ್ಪು ಪ್ರಕಟವಾಗಿ ದಶಕವೇ ಕಳೆದರೂ ರಾಜ್ಯಕ್ಕೆ ಹಂಚಿಕೆಯಾದ ಆಲಮಟ್ಟಿ ಜಲಾಶಯದ ಸಂಪೂರ್ಣ ನೀರನ್ನು ರಾಜ್ಯ ಬಳಸಿಕೊಳ್ಳುವಲ್ಲಿ ವಿಫಲವಾಗಿರುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ; | ದಿನಾಂಕ:30/12/2010ರಲ್ಲಿ ಹೊರಡಿಸಲಾದ ಕೃಷ್ಣಾ ನ್ಯಾಯಾಧೀಕರಣ–2ರ ಅಚಿತಿಮ ವರದಿ ಹಾಗೂ ದಿನಾಂಕ:29/11/2013ರ ಮುಂದುವರೆದ ವರದಿಗಳಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆ ಹಂತ–3ರಡಿ 130 ಟಿ.ಎಂ.ಸಿ ನೀರಿನ ಬಳಕೆಗಾಗಿ ಆಲಮಟ್ಟಿ ಜಲಾಶಯದ ನೀರಿನ ಸಂಗ್ರಹಣೆಯನ್ನು ಆರ್.ಎಲ್ 519.60 ಮೀ. ನಿಂದ ಆರ್.ಎಲ್ 524.256 ಮೀ.ಗೆ ಎತ್ತರಿಸಲು ಅನುಮತಿ ದೊರೆತಿದೆ. ಸದರಿ ವರದಿಗಳು ಕೇಂದ್ರ ಸರ್ಕಾರದಿಂದ ಅಧಿಸೂಚನೆ ಆಗಬೇಕಾಗಿದೆ.<br><br>ಮುಂದುವರೆದು, "ನ್ಯಾಯಬದ್ಧ ಮತ್ತು ಪಾರದರ್ಶಕ ಭೂಸ್ವಾಧೀನ, ಪುನರ್ವಸತಿ ಮತ್ತು ಪುನರ್ ನಿರ್ಮಾಣಕಾಯ್ದೆ 2013" ರಲ್ಲಿ ಈ ಕೆಳಗಿನಂತೆ ನಿಬಂಧಿಸಲಾಗಿದೆ.<br><br>Chapter-V – Rehabilitation & Resettlement Award Clause 38(1) stipulates as under:<br><br>"Provided further that in case of acquisition of land for irrigation or hydel project, being a public purpose, the rehabilitation and resettlement shall be completed six months prior to submergence of the lands acquired".<br><br>ಕೇಂದ್ರ ಸರ್ಕಾರದಿಂದ ನ್ಯಾಯಾಧೀಕರಣ–2ರ ವರದಿಯು ಗೆಜೆಟ್ ಪ್ರಕಟಣೆಗೊಂಡ ನಂತರ ಆಲಮಟ್ಟಿ ಅಣೆಕಟ್ಟೆಯ ಗೇಟ್ ಎತ್ತಿರುಸವ ಪ್ರಸ್ತಾವನೆಗೆ ಸಕ್ಷಮ ಪ್ರಾಧಿಕಾರಿಗಳಿಂದ ಅಗತ್ಯ ತೀರುವಳಿಗಳೊಂದಿಗೆ ಕಾಮಗಾರಿಯನ್ನು ಕೈಗೊಳ್ಳಲು ಸಾಧ್ಯವಾಗುತ್ತದೆ. |
| ಆ | ಹಾಗಿದ್ದಲ್ಲಿ, ನ್ಯಾಯಾಧೀಕರಣದ ತೀರ್ಪಿನಂತೆ ಆಲಮಟ್ಟಿ ಜಲಾಶಯದ ಎತ್ತರವನ್ನು 524.256 ಮೀ.ಗೆ ಎತ್ತರಿಸಿ ರಾಜ್ಯಕ್ಕೆ ಹಂಚಿಕೆಯಾಗಿರುವ ಸಂಪೂರ್ಣ ನೀರನ್ನು ಬಳಸಿಕೊಂಡು ರಾಜ್ಯದ ರೈತರ ಲಕ್ಷಾಂತರ ಎಕರೆ ಭೂಮಿಗೆ ನೀರುಣಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು) | ಕೃಷ್ಣಾ ಜಲ ವಿವಾದ ನ್ಯಾಯಾಧಿಕರಣ–2ರ ಅಂತಿಮ ತೀರ್ಪಿನ ವರದಿರನ್ವಯ ರಾಜ್ಯಕ್ಕೆ 173 ಟಿ.ಎಂ.ಸಿ. ನೀರಿನ ಹಂಚಿಕೆ ಮಾಡಲಾಗಿರುತ್ತದೆ. (ನದಿ ಪಾತ್ರದಡಿ ನೈಸರ್ಗಿಕ ಹರಿವು 7 ಟಿ.ಎಂ.ಸಿ ಒಳಗೊಂಡು). ಈ ಪೈಕಿ ಕೃಷ್ಣಾ ಮೇಲ್ದಂಡೆ ಯೋಜನೆ ಹಂತ–3 ಯೋಜನೆ ಅನುಷ್ಠಾನಕ್ಕೆ ಹಂಚಿಕೆಯಾದ 130 ಟಿ.ಎಂ.ಸಿ. ನೀರಿನ ಬಳಕೆಗೆ ಆಲಮಟ್ಟಿ ಜಲಾಶಯದಡಿ ನೀರಿನ ಸಂಗ್ರಹಣೆಯನ್ನು ಆರ್.ಎಲ್.519.60 ಮೀ.ರಿಂದ ಆರ್.ಎಲ್. 524.256 ಮೀ. (4.656 ಮೀ) ರವರೆಗೆ ಎತ್ತರಿಸುವುದು ಒಳಗೊಂಡಿರುತ್ತದೆ. ಸದರಿ ಯೋಜನೆಯಡಿ ಈ ಕೆಳಕಂಡ 9 ಉಪ ಯೋಜನೆಗಳ ಅನುಷ್ಠಾನಗೊಳಿಸುವುದಾಗಿರುತ್ತದೆ. |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಇ | ಐತೀರ್ಪಿನಂತೆ ರಾಜ್ಯಗಳ ನಡುವೆ ಆಲಮಟ್ಟಿ ಜಲಾಶಯದ ನೀರಿನ ಹಂಚಿಕೆಯ ಸಂಪೂರ್ಣ ವಿವರ ಒದಗಿಸುವುದು. ಇದರಲ್ಲಿ ರಾಜ್ಯಕ್ಕೆ ಎಷ್ಟು ಟಿ.ಎಂ.ಸಿ. ನೀರು ಹಂಚಿಕೆಯಾಗಿದೆ; ಇದರಿಂದ ಎಷ್ಟು ಹೆಕ್ಟೇರ್ ರೈತರ ಜಮೀನು ನೀರಾವರಿಗೆ ಒಳಪಡಲಿದೆ; ಸಂಪೂರ್ಣ ನೀರನ್ನು ಬಳಸಿಕೊಳ್ಳಲು ಸರ್ಕಾರವು ಹಮ್ಮಿಕೊಂಡಿರುವ ಕಾರ್ಯಕ್ರಮಗಳೇನು; ಅವು ಯಾವ ಹಂತದಲ್ಲಿವೆ;(ವಿವರ ನೀಡುವುದು) | ಸದರಿ 9 ಉಪ ಯೋಜನೆಗಳ ಪ್ರಗತಿಯ ಪ್ರಸ್ತುತ ಹಂತದ ವಿವರಗಳನ್ನು **ಅನುಬಂಧ-1 ರಲ್ಲಿ** ಲಗತ್ತಿಸಿದೆ.<br>ಆಲಮಟ್ಟಿ ಆಣೆಕಟ್ಟೆಯ ರೇಡಿಯಲ್ ಕ್ರಸ್ಟ್ ಗೇಟ್‌ಗಳನ್ನು (Radial Crest gate) ಆರ್.ಎಲ್ 519.60 ಮೀ. ನಿಂದ ಆರ್. ಎಲ್. 524.256 ಮೀ. ಗೆ ಎತ್ತರಿಸಲು ಕಟ್ಟ್ ಮಾಡಲಾಗಿರುವ ಗೇಟ್ ಭಾಗಗಳನ್ನು ಜೋಡಿಸಲು ಆಣೆಕಟ್ಟು ಸುರಕ್ಷತೆ ಪರಿಶೀಲನಾ ಸಮಿತಿಯ ಗೇಟ್ ಪರಿಣಿತರಿಂದ ರವರಿಂದ Methodology ಯನ್ನು ಪಡೆದು ಕಾಮಗಾರಿಯ ಅಂದಾಜು ಪತ್ರಿಕೆಯನ್ನು ರೂ.9.00 ಕೋಟಿ ಮೊತ್ತಕ್ಕೆ (2018-19ರ ದರಪಟ್ಟಿ) ತಯಾರಿಸಲಾಗಿರುತ್ತದೆ.<br>ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3 ಯೋಜನೆಯ ರೂ.51,148.94 ಕೋಟಿ ಪರಿಷ್ಕೃತ ಅಂದಾಜು ಮೊತ್ತಕ್ಕೆ ಸರ್ಕಾರವು ಆದೇಶ ದಿನಾಂಕ:09.10.2017 ರನ್ವಯ ಆಡಳಿತಾತ್ಮಕ ಅನುಮೋದನೆ ನೀಡಿರುತ್ತದೆ. ಯೋಜನೆ ಅನುಷ್ಠಾನಕ್ಕಾಗಿ ಪ್ರಾರಂಭದಿಂದ ಫೆಬ್ರವರಿ 2020ರ ವರೆಗೆ ಒಟ್ಟು ರೂ.10,310.59 ಕೋಟಿ (ಭೂಸ್ವಾಧೀನ, ಪುನರ್ವಸತಿ & ಪುನರ್‌ನಿರ್ಮಾಣದ ವೆಚ್ಚಗಳು ಒಳಗೊಂಡಂತೆ) ಖರ್ಚು ಮಾಡಲಾಗಿರುತ್ತದೆ. |
| ಈ | ಐತೀರ್ಪಿನಂತೆ ಆಲಮಟ್ಟಿ ಜಲಾಶಯದ ಎತ್ತರವನ್ನು ಎತ್ತರಿಸಲು ಬೇಕಾಗುವ ಅಂದಾಜು ಅನುದಾನವೆಷ್ಟು; ಬಿಡುಗಡೆಯಾದ ಅನುದಾನವೆಷ್ಟು; (ವಿವರ ಒದಗಿಸುವುದು) | |
| ಉ | ಆಲಮಟ್ಟಿ ಜಲಾಶಯದ ಎತ್ತರವನ್ನು ಎತ್ತರಿಸುವುದರಿಂದ ಎಷ್ಟು ಗ್ರಾಮಗಳು ಮತ್ತು ಎಷ್ಟು ಭೂಪ್ರದೇಶ ಮುಳುಗಡೆಯಾಗಲಿವೆ; ಅವುಗಳ ಸ್ಥಳಾಂತರಕ್ಕೆ ಹಾಗೂ ಪುನರ್ ವಸತಿ ಕಲ್ಪಿಸಲು ತಗಲುವ ಅಂದಾಜು ವೆಚ್ಚವೆಷ್ಟು; ಈ ಸಂಬಂಧ ಸರ್ಕಾರ ತೆಗೆದುಕೊಂಡ ಕ್ರಮಗಳೇನು;(ವಿವರ ಒದಗಿಸುವುದು) | ಆಲಮಟ್ಟಿ ಜಲಾಶಯದ ಆರ್.ಎಲ್ 524.256 ಮೀ.ಗೆ ಜಲಾಶಯದ ಹಿನ್ನೀರಿನಲ್ಲಿ ಸುಮಾರು 188 ಗ್ರಾಮಗಳ ಜಮೀನುಗಳ ಭೂಸ್ವಾಧೀನತೆ ಮತ್ತು ಮುಳುಗಡೆ ಹೊಂದುವ 20 ಗ್ರಾಮಗಳ ಪುನರ್‌ವಸತಿ & ಪುನರ್ ನಿರ್ಮಾಣ ಕೈಗೊಳ್ಳಬೇಕಾಗಿರುತ್ತದೆ. ಯೋಜನೆಯಡಿ ಭೂಸ್ವಾಧೀನಕ್ಕೆ ಒಳಪಡುವ ಜಮೀನುಗಳ ವಿವರಗಳು ಈ ಕೆಳಗಿನಂತಿವೆ.<br><br>ಅ. ನಂ \| ವಿವರ \| ಒಟ್ಟು (ಎಕರೆ)<br>1 \| 188 ಗ್ರಾಮಗಳ ಮುಳುಗಡೆಯಾಗುವ ಜಮೀನು \| 75,563<br> \| 20 ಮುಳುಗಡೆ ಹೊಂದಲಿರುವ ಗ್ರಾಮಗಳಿಗೆ & ಬಾಗಲಕೋಟ ಪಟ್ಟಣ ಪುನರ್‌ವಸತಿಕೇಂದ್ರ ನಿರ್ಮಾಣಕ್ಕಾಗಿ \| 6,467<br>3 \| 9 ಯೋಜನೆಗಳು (ಕಾಲುವೆ ನಿರ್ಮಾಣ) \| 51,837<br> \| ಒಟ್ಟು \| **1,33,867**<br><br>ಮೇಲ್ಕಾಣಿಸಿದಂತೆ ಭೂಸ್ವಾಧೀನತೆ ಹಾಗೂ ಮುಳುಗಡೆ ಹೊಂದುವ 20 ಗ್ರಾಮಗಳ & ಬಾಗಲಕೋಟ ಪಟ್ಟಣ ಪುನರ್ ವಸತಿ ಮತ್ತು ಪುನರ್ ನಿರ್ಮಾಣಕ್ಕಾಗಿ ಹೊಸ ಭೂಸ್ವಾಧೀನಕಾಯ್ದೆ ರನ್ವಯ ಒಟ್ಟಾರೆ ರೂ.30,143.17 ಕೋಟಿ ಅಂದಾಜು ಮೊತ್ತ ತಗುಲಲಿದೆ.<br>ಇದುವರೆಗೂ ಸುಮಾರು 76,000 ಎಕರೆ ಜಮೀನು ಭೂಸ್ವಾಧೀನತೆಗೆ 11(1) ಪ್ರಾಥಮಿಕ ಅಧಿಸೂಚನೆ ಹೊರಡಿಸಲಾಗಿದ್ದು ಭೂಸ್ವಾಧೀನತೆ ಪ್ರಕ್ರಿಯೆ ಈಗಾಗಲೇ ಪ್ರಾರಂಭಗೊಂಡಿರುತ್ತದೆ. 17,631 ಎಕರೆ ಜಮೀನು ಸ್ವಾಧೀನತೆ ಹಾಗೂ 2,326 ಕಟ್ಟಡಗಳ ಸ್ವಾಧೀನತೆಗೆ ಐತೀರ್ಪು ಮಾಡಲಾಗಿದೆ. |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಊ | ಸದರಿ ಯೋಜನೆಯನ್ನು ರಾಷ್ಟ್ರೀಯ ಯೋಜನೆಯನ್ನಾಗಿ ಪರಿಗಣಿಸಿ ಇದಕ್ಕೆ ವಿಶ್ವ ಬ್ಯಾಂಕ್ ಅಥವಾ ಕೇಂದ್ರ ಸರ್ಕಾರದಿಂದ ಹಣಕಾಸು ನೆರವು ಪಡೆಯಲು ಸರ್ಕಾರ ಚಿಂತಿಸಿದೆಯೇ; ಯಾವ ಕಾಲಮಿತಿಯಲ್ಲಿ ಸದರಿ ಯೋಜನೆಯು ಪೂರ್ಣಗೊಳ್ಳುವುದು? | ಸದರಿ ಯೋಜನೆಯನ್ನು ರಾಷ್ಟ್ರೀಯ ಯೋಜನೆಯನ್ನಾಗಿ ಪರಿಗಣಿಸಲು ಈಗಾಗಲೇ ರಾಜ್ಯ ಸರ್ಕಾರದಿಂದ ಕೇಂದ್ರ ಸರ್ಕಾರವನ್ನು ಕೋರಲಾಗಿರುತ್ತದೆ.<br><br>ಯೋಜನೆಗೆ ಅಗತ್ಯ ಅನುದಾನ ಒದಗಿಸುವುದರೊಂದಿಗೆ ಆದ್ಯತೆ ಮೇಲೆ ಅನುಷ್ಠಾನಗೊಳಿಸಲು ಯೋಜಿಸಲಾಗಿದೆ. |

ಸಂಖ್ಯೆ: ಜಸಂಇ 38 ಡಬ್ಲ್ಯೂಬಿಎಂ 2020

(ರಮೇಶ್ ಲ. ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು

## ಅನುಬಂಧ–1

### ಕೃ.ಮೇ.ಯೋ. ಹಂತ–3 ರಡಿಯ 9 ಉಪ ಯೋಜನೆಗಳ ಪ್ರಗತಿಯ ಸಂಕ್ಷಿಪ್ತ ವಿವರಗಳು

| ಕ್ರ. ಸಂ. | ಕೃ.ಮೇ.ಯೋ. ಹಂತ–3 ರಲ್ಲಿಯ ಉಪಯೋಜನೆಗಳು | ನೀರಿನ ಹಂಚಿಕೆ (ಟಿ.ಎಂ.ಸಿ) | ನೀರಾವರಿಕ್ಷೇತ್ರ (ಹೆಕ್ಟೇರ್) | ಯೋಜನೆಅನುಷ್ಠಾನದ ಪ್ರಸ್ತುತ ಹಂತ |
|---|---|---|---|---|
| 1 | ಮುಳವಾಡ ಏತ ನೀರಾವರಿಯೋಜನೆ | 54.40 | 2,27,966 | ಯೋಜನೆಯಡಿಯ ಮುಖ್ಯ ಸ್ಥಾವರಗಳು ಹಾಗೂ ಮುಖ್ಯ / ಶಾಖಾ ಕಾಲುವೆ ಕಾಮಗಾರಿಗಳು ಮತ್ತು ಹಲವು ವಿತರಣಾ ಕಾಲುವೆ ಜಾಲದ (ಅಚ್ಚುಕಟ್ಟು ವ್ಯಾಪ್ತಿಯಡಿಯ ಕೆರೆಗಳಿಗೆ ನೀರು ಹರಿಸಲು ಅನುಕೂಲವಾಗಿಸುವ) ಕಾಮಗಾರಿಗಳು ಪೂರ್ಣಗೊಳಿಸಿ ಪ್ರಾಯೋಗಿಕವಾಗಿ ನೀರನ್ನು ಹರಿಸಲಾಗುತ್ತಿದೆ. ಯೋಜನೆಯಡಿಕೈಗೆತ್ತಿಕೊಂಡಿರುವ ಬಾಕಿ ಕಾಮಗಾರಿಗಳು ಪ್ರಗತಿಯ ವಿವಿಧ ಹಂತದಲ್ಲಿರುತ್ತವೆ. |
| 2. | ಚಿಮ್ಮಲಗಿಏತ ನೀರಾವರಿಯೋಜನೆ | 20.75 | 87,067 | |
| 3 | ಇಂಡಿಏತ ನೀರಾವರಿಯೋಜನೆ (ಗುತ್ತಿಬಸವಣ್ಣ) | 18.90 | 20,690 | ಇಂಡಿಏತ ನೀರಾವರಿ ಮುಖ್ಯ ಕಾಲುವೆ ವಿಸ್ತರಣೆ ಕಿ.ಮೀ. 97.30 ರಿಂದ 147.00 (ವಿತರಣಾ ಕಾಲುವೆಗಳು ಒಳಗೊಂಡು) ಪೂರ್ಣಗೊಂಡಿದ್ದು, ಪೂರ್ಣಗೊಂಡ ಕಾಲುವೆ ಜಾಲದಡಿ ಪ್ರಾಯೋಗಿಕವಾಗಿ ನೀರು ಹರಿಬಿಡಲಾಗಿದೆ. ಟೇಲ್ಎಂಡ್ ವಿತರಣಾ ಕಾಲುವೆ ಮತ್ತು ವಿಸ್ತರಣೆ ಕಾಮಗಾರಿಗಳು ಪೂರ್ಣಗೊಳ್ಳುವ ಹಂತದಲ್ಲಿದೆ. |
| 4 | ನಾರಾಯಣಪೂರ ಬಲದಂಡೆ ಕಾಲುವೆ ವಿಸ್ತರಣೆ | 4.90 | 61,747 | ನಾ.ಬ.ದಂ.ಕಾ. ಮುಖ್ಯ ಕಾಲುವೆ ವಿಸ್ತರಣೆ ಕಿ.ಮೀ. 95.00 ರಿಂದ 135.00 ವರೆಗೆ ಪೂರ್ಣಗೊಂಡಿದ್ದು, ಕಿ.ಮೀ. 135.00 ರಿಂದ 168.00 ಹಾಗೂ ವಿತರಣಾ ಕಾಲುವೆ–23, 36, 38 ಜಾಲದ ಕಾಮಗಾರಿಗಳು ಪ್ರಗತಿಯ ವಿವಿಧ ಹಂತದಲ್ಲಿರುತ್ತದೆ. |
| 5 | ರಾಂಪೂರಏತ ನೀರಾವರಿಯೋಜನೆ | 3.30 | 13,923 | ಪೂರ್ವ ಮುಖ್ಯ ಕಾಲುವೆ ವಿಸ್ತರಣೆ ಕಿ.ಮೀ. 20.00 ರಿಂದ 27.00 & ವಿತರಣಾ ಕಾಲುವೆ ಸಂ.10, 11 ಮತ್ತು 12 ಕಾಮಗಾರಿಗಳು ಪೂರ್ಣಗೊಂಡಿರುತ್ತವೆ ಹಾಗೂ ಪೂರ್ಣಗೊಂಡ ಕಾಲುವೆ ಜಾಲದಡಿ ಪ್ರಾಯೋಗಿಕವಾಗಿ ನೀರು ಹರಿಸಲಾಗಿದೆ. ಟೇಲ್ಎಂಡ್ ವಿತರಣಾ ಕಾಲುವೆ ಪೂರ್ಣಗೊಂಡಿದ್ದು, ಹಟ್ಟಿಚಿನ್ನದಗಣಿ ಬಳಿ ಕಿ.ಮೀ.17.56 ರಿಂದ 21.94 ವರೆಗಿನರೀಚ್‌ನಲ್ಲಿಅಕ್ಕಪಕ್ಕಕಾಮಗಾರಿ ಪೂರ್ಣಗೊಳ್ಳುವ ಹಂತದಲ್ಲಿದೆ. |
| 6 | ಮಲ್ಲಾಬಾದ್ಏತ ನೀರಾವರಿಯೋಜನೆ | 8.00 | 33,730 | ಯೋಜನೆಯಡಿಯ 3 ಟರ್ನ್ ಕೀ ಆಧಾರದ ಮುಖ್ಯ ಸ್ಥಾವರ ಕಾಮಗಾರಿಗಳು ಪೂರ್ಣಗೊಂಡಿವೆ ಹಾಗೂ ಪ್ರಾಯೋಗಿಕಕಾರ್ಯಾರಂಭ ಮಾಡಲಾಗಿದೆ. ಯೋಜನೆಯ 3 ಮುಖ್ಯ ಸ್ಥಾವರಗಳಡಿಯ ಕಾಲುವೆ ಜಾಲದ ಕಾಮಗಾರಿಗಳು ಪ್ರಗತಿಯ ವಿವಿಧ ಹಂತದಲ್ಲಿದ್ದು, ಪೂರ್ಣಗೊಂಡ ಕಾಲುವೆ ಜಾಲಗಳಡಿ ಪ್ರಾಯೋಗಿಕವಾಗಿ ನೀರು ಹರಿಸಲಾಗಿದೆ. |
| 7. | ಕೊಪ್ಪಳ ಏತ ನೀರಾವರಿಯೋಜನೆ (*) | 11.50 | (*) 48,436 | ಯೋಜನೆಯ 1ನೇ & 2ನೇ ಟರ್ನ್ ಕೀ ಆಧಾರಿತ ಮುಖ್ಯ ಸ್ಥಾವರಗಳ ಕಾಮಗಾರಿ ಪೂರ್ಣಗೊಂಡಿದೆ ಹಾಗೂ 220 ಕೆ.ವಿ ಪವರ್ ಲೈನ್&ಟರ್ಮಿನಲ್ ಬೇ ಕಾಮಗಾರಿ ಪ್ರಗತಿಯಲ್ಲಿವೆ. ಯೋಜನೆಯಡಿಯೋಜಿತ 1.12 ಲಕ್ಷ ಹೆಕ್ಟೇರ್ಅಚ್ಚುಕಟ್ಟುಕ್ಷೇತ್ರದಡಿ ಹನಿ ನೀರಾವರಿ ಪದ್ಧತಿ ಅಳವಡಿಕೆಗಾಗಿ ಅಂದಾಜು |

| ಕ್ರ. ಸಂ. | ಕೃ.ಮೇ.ಯೋ. ಹಂತ–3 ರಲ್ಲಿಯ ಉಪಯೋಜನೆಗಳು | ನೀರಿನ ಹಂಚಿಕೆ (ಟಿ.ಎಂ.ಸಿ) | ನೀರಾವರಿಕ್ಷೇತ್ರ (ಹೆಕ್ಟೇರ್) | ಯೋಜನೆಅನುಷ್ಠಾನದ ಪ್ರಸ್ತುತ ಹಂತ |
|---|---|---|---|---|
| | | | | ಪತ್ರಿಕೆತಯಾರಿಸಲಾಗಿದೆ. ಪ್ರಸ್ತುತಯೋಜನೆಯಡಿ ಸಂಪ್ ಕಂ ಜಾಕ್–ವೆಲ್, ರೈಸಿಂಗ್ ಮೈನ್ ಮತ್ತು ಪೈಪಲೈನ್ ಅಳವಡಿಕೆಯ ಜಾಲಗಳಿಂದ ಅಚ್ಚುಕಟ್ಟು ವ್ಯಾಪ್ತಿಯ 76 ಕೆರೆಗಳನ್ನು ತುಂಬಿಸುವ 3 ಪ್ಯಾಕೇಜ್ ಕಾಮಗಾರಿಗಳ ಗುತ್ತಿಗೆಯನ್ನುಇತ್ತೀಚಿಗೆ ವಹಿಸಲಾಗಿದ್ದು ಕಾಮಗಾರಿಗಳು ಪ್ರಾರಂಭಿಕ ಹಂತದಲ್ಲಿರುತ್ತವೆ. |
| 8 | ಹೆರಕಲ್ಏತ ನೀರಾವರಿಯೋಜನೆ | 3.60 | 15,344 | ಯೋಜನೆಯಡಿಘಟಪ್ರಭಾ ನದಿಗೆ ಅಡ್ಡಲಾಗಿ ಹೆರಕಲ್ ಬ್ರಿಡ್ಜ್–ಕಂ–ಬ್ಯಾರೇಜ್ಕಾಮಗಾರಿ ಪೂಣಗೊಂಡಿದೆ. ಹೆರಕಲ್ (ದಕ್ಷಿಣ) ಮತ್ತು ಹೆರಕಲ್ (ಉತ್ತರ) ಏತ ನೀರಾವರಿಟರ್ನ ಕೀ ಆಧಾರಿತ ಮುಖ್ಯ ಸ್ಥಾವರದ ಕಾಮಗಾರಿಗಳು ಪೂರ್ಣಗೊಂಡಿದ್ದು ಪ್ರಾಯೋಗಿಕಕಾರ್ಯರಂಭ ಮಾಡಲಾಗಿದೆ. ಹೆರಕಲ್ (ದಕ್ಷಿಣ) ಮತ್ತು ಹೆರಕಲ್ (ಉತ್ತರ) ಏತ ನೀರಾವರಿ ವ್ಯಾಪ್ತಿಯಡಿಯ ಕಾಲುವೆ ಜಾಲದ ನಿರ್ಮಾಣದ ಕಾಮಗಾರಿಗಳು ಪ್ರಗತಿ ವಿವಿಧ ಹಂತದಲ್ಲಿವೆ. |
| 9 | ಭೀಮಾ ಫ್ಲ್ಯಾಂಕ್ | 5.10 | 21,572 | ಯೋಜನೆಯಡಿ ಶಹಾಪುರ ಶಾಖಾ ಮುಖ್ಯ ಕಾಲುವೆ ವಿಸ್ತರಣೆ ಕಿ.ಮೀ.75.30 ರಿಂದ 96.50 ಪ್ಯಾಕೇಜ್ಕಾಮಗಾರಿ ಪ್ರಗತಿಯಲ್ಲಿದೆ. |
| | **ಒಟ್ಟು** | | **5,30,475** | |

(*) **ಕೊಪ್ಪಳ ಏತ ನೀರಾವರಿ ಯೋಜನೆಯಡಿ ಸರ್ಕಾರದ ಅನುಮೋದನೆಯನ್ವಯ 1.12 ಲಕ್ಷ ಹೆಕ್ಟೇರ್ (2.77 ಲಕ್ಷ ಎಕರೆ) ಕ್ಷೇತ್ರಕ್ಕೆ ಹನಿ ನೀರಾವರಿ ಸೌಲಭ್ಯ ಒದಗಿಸುವುದಾಗಿರುತ್ತದೆ.**

ಕೃಷ್ಣಾ ಮೇಲ್ದಂಡೆ ಯೋಜನೆ ಹಂತ–3ರಡಿ 9 ಉಪ ಯೋಜನೆಗಳಡಿ ಇದುವರೆಗೂ ಒಟ್ಟು76,173 ಹೆಕ್ಟೇರ್ ಅಚ್ಚುಕಟ್ಟು ಕ್ಷೇತ್ರದ ಔಟ್‌ಲೆಟ್ ನೀರಾವರಿ ಸಾಮಥ್ಯ ಕಲ್ಪಿಸಲಾಗಿರುತ್ತದೆ. (ಮುಳವಾಡ, ಚಿಮ್ಮಲಗಿ, ಇಂಡಿ, ಮಲ್ಲಾಬಾದ್ ಹಾಗೂ ರಾಂಪುರ ಏತ ನೀರಾವರಿ ಯೋಜನೆಗಳಡಿ). ಸದರಿ ಕಲ್ಪಿಸಲಾದ ನೀರಾವರಿ ಸಾಮರ್ಥ್ಯವು ಕೃಷ್ಣಾ ನ್ಯಾಯಾಧೀಕರಣ–2ರ ಅಂತಿಮ ತೀರ್ಪಿನ ಅಧಿಸೂಚನೆಗೆ ಒಳಪಟ್ಟಿದೆ.

*****